ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಹೊಸ ಮದ್ಯದಂಗಡಿಗಳಿಗೆ ಪರವಾನಗಿ ನೀಡುವ ಕುರಿತು

ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) :-

1269 (1485) ಮಾನ್ಯ ಅಬಕಾರಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ಎಷ್ಟು ಮದ್ಯದ ಅಂಗಡಿಗಳಿವೆ; ಹೊಸದಾಗಿ ಪರವಾನಗಿ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ; ಇದ್ದಲ್ಲಿ, ಎಷ್ಟು ಪರವಾನಗಿ ನೀಡಲಾಗುವುದು ;

(ಆ) ಕಳೆದ 5 ವರ್ಷಗಳಲ್ಲಿ ಎಷ್ಟು ಮದ್ಯದ ಅಂಗಡಿಗಳಿಗೆ ಪರವಾನಗಿ ನೀಡಲಾಗಿದೆ ; (ವಿವರ ನೀಡುವುದು)

(ಇ) ಮದ್ಯದ ಅಂಗಡಿಗಳಿಗೆ ಪರವಾನಗಿ ಪಡೆಯಲು ಇರುವ ಮಾನದಂಡಗಳೇನು ; (ಆದೇಶ/ಮಾರ್ಗಸೂಚಿ ನೀಡುವುದು)

(ಈ) ಎಂಎಸ್ಐಎಲ್ ಅಂಗಡಿಗಳಿಗೆ ಪರವಾನಗಿ ನೀಡಲು ಇರುವ ಮಾನದಂಡ/ನಿಯಮ ಏನು ;

(ಉ) ಪ್ರಸ್ತುತ ವರ್ಷದಲ್ಲಿ ಎಷ್ಟು ಎಂಎಸ್ಐಎಲ್ ಅಂಗಡಿಗಳಿಗೆ ಪರವಾನಗಿ ನೀಡಲಾಗಿದೆÀ ಹಾಗೂ ನೀಡಲು ಉದ್ದೇಶಿಸಲಾಗಿದೆ? (ವಿವರ ಒದಗಿಸುವುದು)